CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಜನವರಿ ೨೨, ೨೦೦೪ (ಮಾಘ ೨, ಶಕ ವರ್ಷ ೧೯೨೫) | ಸಂಚಿಕೆ ೪ |
|---|---|---|

## ಭಾಗ - ೪ -ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 290 ಸಿಎನ್ಎಸ್ 2000, ಬೆಂಗಳೂರು, ದಿನಾಂಕ: 8ನೇ ಡಿಸೆಂಬರ್ 2003**

ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ 290 ಸಿಎನ್ಎಸ್ 2000 ದಿನಾಂಕ 17.8.2000ರಲ್ಲಿ ಧಾರವಾಡ ಜಿಲ್ಲೆ ಕಲಘಟಗಿ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಕಲಘಟಗಿ ಇದರ ಆಡಳಿತ ಮಂಡಳಿಗೆ ಮಾಡಿದ್ದ ಎಲ್ಲಾ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರಿದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡವರುಗಳನ್ನು ಧಾರವಾಡ ಜಿಲ್ಲೆ ಕಲಘಟಗಿ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಕಲಘಟಗಿ ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಶಿವಕಲ್ಲಪ್ಪ ಮಹದೇವಪ್ಪ ಕುಬಿಹಾಳ, ಸಾ: ಮಡಕಿ ಹೊನ್ನಿಹಳ್ಳಿ
2. ಶ್ರೀಮತಿ ಶೋಭಾ ತಿರುಕಪ್ಪ ವಾಲಿಕಾರ್, ಸಾ: ಉಗ್ಗಿನಕೇರಿ
3. ಶ್ರೀ ಶಿವಪ್ಪ ಬಸಪ್ಪ ಕಾಳಿ, ಸಾ: ಮಿಶ್ರಿಕೋಟಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1332

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 295 ಸಿಎನ್ಎಸ್ 2000, ಬೆಂಗಳೂರು, ದಿನಾಂಕ: 25ನೇ ಅಕ್ಟೋಬರ್ 2003**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 293 ಸಿಎನ್ಎಸ್ 2000, ದಿನಾಂಕ 18.8.2000ರ ಅನುಬಂಧದ ಕ್ರಮ ಸಂಖ್ಯೆ 1ರಲ್ಲಿ, ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನ ವಿದ್ಯಾರಣ್ಯ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ, ಚಿತ್ತವಾಡಗಿ ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಎಸ್. ಖಾಜಾಹುಸೇನ್ ತಂದೆ ಎಫ್ ಧಪ್ಪಗಿರಿಸಾಬ್, ಚಿತ್ತವಾಡಗಿರವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1333

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 389 ಸಿಎನ್ಎಸ್ 2000, ಬೆಂಗಳೂರು, ದಿನಾಂಕ: 23ನೇ ಅಕ್ಟೋಬರ್ 2003**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 389 ಸಿಎನ್ಎಸ್ 2000, ದಿನಾಂಕ 11.09.2000ರಲ್ಲಿ ಮಂಡ್ಯ ಜಿಲ್ಲೆ ಮಳವಳ್ಳಿ ತಾಲ್ಲೂಕಿನ ಸುಜ್ಜಲೂರು ವ್ಯವಸಾಯ ಸೇವಾ ಸಹಕಾರ ಸಂಘ ನಿ, ಸುಜ್ಜಲೂರು ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಬಸವರಾಜು ಬಿನ್ ಶ್ರೀ ಚಿಕ್ಕ ಪುಟ್ಟಯ್ಯ, ನಂಜೇಗೌಡನದೊಡ್ಡಿರವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1334

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 446 ಸಿಎನ್ಎಸ್ 2000, ಬೆಂಗಳೂರು, ದಿನಾಂಕ: 3ನೇ ಡಿಸೆಂಬರ್ 2003**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 446 ಸಿಎನ್ಎಸ್ 2000, ದಿನಾಂಕ 7.12.2002 ರಲ್ಲಿ ಮೈಸೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ, ಮೈಸೂರು, ಇದರ ಆಡಳಿತ ಮಂಡಳಿಗೆ ಸಹಕಾರ ಸಂಘಗಳ ಕಾಯಿದೆ ಕಲಂ 29 ಮತ್ತು 53ಎ ರಡಿಯಲ್ಲಿ ಮಾಡಿದ್ದ ಎಲ್ಲಾ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರಿದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29ರ ಉಪ ಕಲಂ (1)ರ ಹಾಗೂ 53ಎ ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡವರುಗಳನ್ನು ಮೈಸೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ, ಮೈಸೂರು ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

**ಕಲಂ 29(1) ರಡಿಯಲ್ಲಿ**

1) ಶ್ರೀ ಜಿ.ಎಸ್. ಗಂಗಯ್ಯ, ಗಳಿಗೆಕೆರೆ, ಹೊಸ ಅಗ್ರಹಾರ ಹೋಬಳಿ,
ಕೆ.ಆರ್. ನಗರ ತಾ: ಮೈಸೂರು ಜಿಲ್ಲೆ.
2) ಶ್ರೀ ರಹಮತ್ ಜಾನ್ ಬಾಬು, ಜಿಲ್ಲಾ ಪಂಚಾಯತ್ ಸದಸ್ಯರು,
ದೊಡ್ಡನೇರಳೆ ಗ್ರಾಮ, ಚಿಕ್ಕನೇರಳೆ ಅಂಚೆ, ಪಿರಿಯಾಪಟ್ಟಣ ತಾ: ಮೈಸೂರು ಜಿಲ್ಲೆ.
3) ಶ್ರೀಮತಿ ಪಿ.ಎಂ. ಮಾಲಿನಿ ಕೋಂ ವಿಶ್ವನಾಥ್,
ನಾಯಕರ ಬೀದಿ, ಗುಂಡ್ಲುಪೇಟೆ, ಗುಂಡ್ಲುಪೇಟೆ ತಾಲ್ಲೂಕು.

**ಕಲಂ 53ಎ ರಡಿಯಲ್ಲಿ**

1) ಶ್ರೀ ಕೆ.ಪಿ. ರಾಜು ಬಿನ್ ಪುಟ್ಟಬಸಪ್ಪ, ಕುರಹಟ್ಟಿ ಗ್ರಾಮ ಕಸಬಾ ಹೋಬಳಿ,
ನಂಜನಗೂಡು ತಾ: ಮೈಸೂರು ಜಿಲ್ಲೆ,
2) ಶ್ರೀ ಚಿಕ್ಕಬೋರಯ್ಯ ಬಿನ್ ಬೋರೇಗೌಡ,
ಜಿ.ಬಿ.ಸರಗೂರು, ಹೆಚ್.ಡಿ.ಕೋಟೆ ತಾಲ್ಲೂಕು , ಮೈಸೂರು ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1335

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 449 ಸಿಎನ್ಎಸ್ 2000, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2003**

ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ 449 ಸಿಎನ್ಎಸ್ 2000 ದಿನಾಂಕ: 15.02.2001 ಮತ್ತು 14.6.2001 ರಲ್ಲಿ ಕೋಲಾರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ, ಕೋಲಾರ ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಕೆ.ಎ. ವಿಶ್ವನಾಥ ಶರ್ಮ ಬಿನ್ ಅಪ್ಪಾಜಿ ದೀಕ್ಷಿತ್ ಕುರುಬೂರು ಮತ್ತು ಶ್ರೀ ಎನ್.ಎಸ್. ಶಂಕರ್ ಬಿನ್ ಎಸ್. ಸುಬ್ಬಯ್ಯ ನಂಬುವಾರಿಪಲ್ಲಿ ಇವರುಗಳ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1338

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 523 ಸಿಎನ್ಎಸ್ 2000, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2003**

ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ 523 ಸಿಎನ್ಎಸ್ 2000 ದಿನಾಂಕ 6.2.2001 ರ ಅನುಬಂಧದ ಕ್ರಮ ಸಂಖ್ಯೆ:1ರಲ್ಲಿ ಮೈಸೂರು ಜಿಲ್ಲೆ ಮತ್ತು ತಾಲ್ಲೂಕಿನ ಆಯರಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ, ಆಯರಹಳ್ಳಿ ಇದರ ಆಡಳಿತ ಮಂಡಳಿಗೆ ಮಾಡಿದ್ದ ಎಲ್ಲಾ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರಿದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡವರುಗಳನ್ನು ಮೈಸೂರು ಜಿಲ್ಲೆ ಮತ್ತು ತಾಲ್ಲೂಕಿನ ಆಯರಹಳ್ಳಿ ಕೃಷಿ ಪತ್ತಿನ ಸಹಕಾರ ಬ್ಯಾಂಕ್ ನಿ, ಆಯರಹಳ್ಳಿ ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀಮತಿ ಪ್ರೇಮಾ ಕೋಂ ಗುರುಸಿದ್ದಪ್ಪ ಆಯರಹಳ್ಳಿ
2. ಶ್ರೀ ದೊಡ್ಡಮನೆ ಸಿದ್ದಯ್ಯ ಬಿನ್ ಲೇಟ್ ದೊಡ್ಡಮನೆ ಸಿದ್ದಯ್ಯ, ದೇವಲಾಪುರ
3. ಶ್ರೀ ಮಾದಪ್ಪ ಬಿನ್ ಸುಬ್ಬಪ್ಪ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1339

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 630 ಸಿಎನ್‌ಎಸ್ 2000, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2003**

ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ 630 ಸಿಎನ್‌ಎಸ್ 2000 ದಿನಾಂಕ 13.12.2000ರಲ್ಲಿ ಚಿಕ್ಕಮಗಳೂರು ಜಿಲ್ಲೆ ಶೃಂಗೇರಿ ತಾಲ್ಲೂಕಿನ ಹಾಲಂದೂರು ವ್ಯವಸಾಯ ಸೇವಾ ಸಹಕಾರ ಸಂಘ ನಿ, ಹಾಲಂದೂರು ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀಮತಿ ಜಯ ಕೋಂ ಶಂಕರ, ಮೆಣಸೆ, ಭಾರತೀನಗರ ಅಂಚೆ, ಶೃಂಗೇರಿ ತಾಲ್ಲೂಕು ಇವರ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರಿದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಶ್ರೀಮತಿ ವಿಜಯ ಕೋಂ ವೆಂಕಟೇಶ, ಹಾಲಂದೂರು ಅಂಚೆ, ಶೃಂಗೇರಿ ತಾಲ್ಲೂಕು ಇವರನ್ನು ಚಿಕ್ಕಮಗಳೂರು ಜಿಲ್ಲೆ ಶೃಂಗೇರಿ ತಾಲ್ಲೂಕಿನ ಹಾಲಂದೂರು ವ್ಯವಸಾಯ ಸೇವಾ ಸಹಕಾರ ಸಂಘ ನಿ, ಹಾಲಂದೂರು ಇದರ ಆಡಳಿತ ಮಂಡಳಿಯ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1340

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 652 ಸಿಎನ್‌ಎಸ್ 2000, ಬೆಂಗಳೂರು, ದಿನಾಂಕ: 10ನೇ ಡಿಸೆಂಬರ್ 2003**

ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ 652 ಸಿಎನ್‌ಎಸ್ 2000 ದಿನಾಂಕ 22.12.2000 ಅನುಬಂಧದ ಕ್ರಮ ಸಂಖ್ಯೆ 11 ರಲ್ಲಿ ಹುಣಸೂರು ತಾಲ್ಲೂಕಿನ ಗಾಗೇನಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿಯಮಿತ, ಗಾಗೇನಹಳ್ಳಿ ಇದರ ಆಡಳಿತ ಮಂಡಳಿಗೆ ಮಾಡಿದ್ದ ಎಲ್ಲಾ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರಿದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡವರುಗಳನ್ನು ಮೈಸೂರು ಜಿಲ್ಲೆ ಹುಣಸೂರು ತಾಲ್ಲೂಕಿನ ಗಾಗೇನಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿಯಮಿತ, ಗಾಗೇನಹಳ್ಳಿ ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ದೇವರಾಜು ಬಿನ್ ಚೆನ್ನಪ್ಪ, ಗಾಗೇನಹಳ್ಳಿ ಗ್ರಾಮ, ಹುಣಸೂರು ತಾ:
2. ಶ್ರೀಮತಿ ಸಣ್ಣತಾಯಮ್ಮ ಕೋಂ ರಾಜಾಚಾರಿ, ಚಲ್ಲಹಳ್ಳಿ, ಹುಣಸೂರು ತಾ:
3. ಶ್ರೀ ಸ್ವಾಮಿ ಬಿನ್ ಕರಿಯಯ್ಯ ಈರನದಾಸಿ ಕೊಪ್ಪಲು, ಹುಣಸೂರು ತಾ:

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1341

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 31 ರಾಶಾಪ್ರ 2003, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2003**

ಕರ್ನಾಟಕ ಸೇವಾ ಪರೀಕ್ಷೆಗಳ ಅಧಿನಿಯಮ, 1976 ಇದರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಆಫಿಷಿಯಲ್ ಲಾಂಗ್ವೇಜ್ ಆಕ್ಟ್ 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

**ಕರ್ನಾಟಕ ಸೇವಾ ಪರೀಕ್ಷೆಗಳ ಅಧಿನಿಯಮ, 1976**

**ಪ್ರಕರಣಗಳ ಅನುಕ್ರಮಣಿಕೆ**

**ಪ್ರಕರಣಗಳು:**

## ಉದ್ದೇಶ ಮತ್ತು ಕಾರಣಗಳ ಹೇಳಿಕೆ

I

**1976ರ ಅಧಿನಿಯಮ 40.-** ಸರ್ಕಾರಿ ನೌಕರರಿಗೆ ಇಲಾಖಾ ಪರೀಕ್ಷೆಗಳನ್ನು ಗೊತ್ತುಪಡಿಸುವುದರ ಸಿಂಧುತ್ವದ ಪ್ರಶ್ನೆ ಮತ್ತು ಸದರಿ ಪರೀಕ್ಷೆಗಳಲ್ಲಿ ಉತ್ತೀರ್ಣರಾಗುವುದನ್ನು ಆಧರಿಸಿ ಅವರಿಗೆ ಬಡ್ತಿ ನೀಡುವುದರ ಸಿಂಧುತ್ವದ ಪ್ರಶ್ನೆ - ಇವೆರಡೂ ನ್ಯಾಯಾಲಯದ ಮುಂದೆ ಬಂದಿದ್ದವು. ತೀರ್ಮಾನಗಳು ಪರಸ್ಪರ ವಿರೋಧವಾಗಿವೆ. ಒಂದು ವರ್ಗದ ಸಂಬಂಧದಲ್ಲಿ ಮೊಕದ್ದಮೆಗಳ ತೀರ್ಮಾನವು ಪರೀಕ್ಷೆಗಳನ್ನು ಗೊತ್ತುಪಡಿಸುವುದನ್ನು ಎತ್ತಿ ಹಿಡಿದರೆ, ಇತರ ಮೊಕದ್ದಮೆಗಳಲ್ಲಿ ರಾಜ್ಯಗಳ ಪುನರ್ವಿಂಗಡಣೆ ಅಧಿನಿಯಮದ 115(7)ನೇ ಪ್ರಕರಣದ ಮೇರೆಗೆ ಕೇಂದ್ರ ಸರ್ಕಾರದ ಅನುಮೋದನೆಯನ್ನು ಮೊದಲೇ ಪಡೆದುಕೊಂಡಿಲ್ಲವೆಂಬ ಆಧಾರದ ಮೇಲೆ ತದ್ವಿರುದ್ಧವಾದ ಅಭಿಪ್ರಾಯವನ್ನು ವ್ಯಕ್ತಪಡಿಸಲಾಯಿತು.

ಹಲವಾರು ಪ್ರಕರಣಗಳಲ್ಲಿ ನ್ಯಾಯಾಲಯಗಳು, ಯಾವುದೇ ಪರೀಕ್ಷೆಯನ್ನು ಸಿಂಧುವಾಗಿ ಗೊತ್ತುಪಡಿಸಲಾಗಿದ್ದಿಲ್ಲ ಎಂಬ ಆಧಾರದ ಮೇಲೆ ಪೂರ್ವಾನ್ವಯ ಬಡ್ತಿಗಳನ್ನು ಮತ್ತು ಬಾಕಿಗಳ ಸಂದಾಯಗಳನ್ನು ನೀಡುವಂತೆ ಸಹಾ ನಿರ್ದೇಶನ ನೀಡಿವೆ.

ಸರ್ವೋಚ್ಚ ನ್ಯಾಯಾಲಯವು ಎಐಆರ್ 1967, ಸರ್ವೋಚ್ಚ ನ್ಯಾಯಾಲಯ 856 ರಲ್ಲಿ ವರದಿಯಾಗಿರುವ ಅಜಿತ್‌ಸಿಂಗ್ ವಿರುದ್ಧ ಪಂಜಾಬ್ ರಾಜ್ಯ ಮೊಕದ್ದಮೆಯಲ್ಲಿ ಮತ್ತು ಎಐಆರ್ 1970, ಸರ್ವೋಚ್ಚ ನ್ಯಾಯಾಲಯ 385 ರಲ್ಲಿ ವರದಿಯಾಗಿರುವ ಆದಾಯ ತೆರಿಗೆ ಅಧಿಕಾರಿ, ಅಲೆಪ್ಪಿ ವಿರುದ್ಧ ಎನ್.ಸಿ. ಪೊನ್ನೂಸ್ ಮೊಕದ್ದಮೆಯಲ್ಲಿ ಸರ್ವೋಚ್ಚ ನ್ಯಾಯಾಲಯವು ಈ ರೀತಿ ತೀರ್ಪು ನೀಡಿದೆ. ಎಂದರೆ, ಶಾಸನಬದ್ಧ ಕಾರ್ಯಗಳನ್ನು ಚಲಾಯಿಸುವಂಥ ಹುದ್ದೆಗಳಿಗೆ ಸಿವಿಲ್ ನೌಕರರನ್ನು ನೇಮಕ ಮಾಡಲು ಸಾಧ್ಯವಿಲ್ಲ. ಕಾರಣವೆಂದರೆ, ಈ ತೀರ್ಮಾನಗಳ ಹಿನ್ನೆಲೆಯಲ್ಲಿ ಆ ಶಾಸನಬದ್ಧ ಕಾರ್ಯಗಳ ನಿರ್ವಹಣೆಯನ್ನು ಒಳಗೊಂಡ ಹುದ್ದೆಗಳಿಗೆ ಪೂರ್ವಾನ್ವಯವಾಗಿ ಬಡ್ತಿ ನೀಡಿದ ಪಕ್ಷದಲ್ಲಿ ಕಾನೂನು ತೊಡಕುಗಳು ಉಂಟಾಗುತ್ತವೆ. ಅಲ್ಲದೆ, ಬಡ್ತಿ ಹುದ್ದೆಗಳಲ್ಲಿ ಕರ್ತವ್ಯಗಳನ್ನು ನಿರ್ವಹಿಸಿರದಂಥ ಆ ವ್ಯಕ್ತಿಗಳಿಗೆ ವೇತನ ಮತ್ತು ಭತ್ಯೆಯ ಭಾರೀ ಮೊತ್ತದ ಬಾಕಿಯನ್ನು ಸಂದಾಯ ಮಾಡಬೇಕಾಗುತ್ತದೆ ಎಂದು ಸರ್ವೋಚ್ಚ ನ್ಯಾಯಾಲಯ ತೀರ್ಪು ನೀಡಿದೆ.

ಆದುದರಿಂದ, ಈ ವಿವಾದವನ್ನು ನಿವಾರಿಸಲು ಮತ್ತು ಮೇಲೆ ಸೂಚಿಸಿದಂಥ ಪರಿಣಾಮಗಳು ಉಂಟಾಗದಂತೆ ತಡೆಯುವ ಒಂದು ವ್ಯವಸ್ಥೆ ಮಾಡಲು ಕೆಳಕಂಡಂತೆ ಪ್ರಸ್ತಾವಿಸಲಾಗಿದೆ.-

(i) 1974ರ ಜನವರಿ 10ಕ್ಕೆ ಮೊದಲು, ಅಂದರೆ ರಾಜ್ಯಗಳ ಪುನರ್ವಿಂಗಡಣೆ ಅಧಿನಿಯಮದ 115(7)ನೇ ಪ್ರಕರಣದ ಮೇರೆಗೆ ಕೇಂದ್ರ ಸರ್ಕಾರದಿಂದ ಪೂರ್ವಾನುಮೋದನೆಯನ್ನು ಪಡೆದುಕೊಂಡ ತರುವಾಯ ಕರ್ನಾಟಕ ಸಿವಿಲ್ ಸೇವೆಗಳ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳು, 1974 ಇದನ್ನು ಹೊರಡಿಸಿದ ದಿನಾಂಕಕ್ಕೆ ಮೊದಲು ಯಾವುದೇ ಸೇವಾ ಪರೀಕ್ಷೆಗಳನ್ನು ಸಿಂಧುವಾಗಿ ನಿರ್ದಿಷ್ಟಪಡಿಸಿರಲಿಲ್ಲವೆಂದು ಘೋಷಿಸುವುದು;

(ii) ಆ ದಿನಾಂಕದವರೆಗೆ ಮಾಡಿರುವ ಎಲ್ಲಾ ಬಡ್ತಿಗಳ ಪುನರವಲೋಕನ ಮಾಡುವ ಬಗ್ಗೆ ವ್ಯವಸ್ಥೆ ಮಾಡುವುದು;

(iii) ಉತ್ತರಾನ್ವಯ ಬಡ್ತಿಗಳಿಗೆ ಮಾತ್ರ ವ್ಯವಸ್ಥೆ ಮಾಡುವುದು;

(iv) ರಾಜ್ಯದ ಖಜಾನೆಗೆ ಭಾರೀ ಪ್ರಮಾಣದ ಆರ್ಥಿಕ ಹೊರೆ ಬೀಳುವ ದೃಷ್ಟಿಯಿಂದ ಬಾಕಿಗಳನ್ನು ಸಂದಾಯ ಮಾಡದಿರುವುದಕ್ಕೆ ವ್ಯವಸ್ಥೆ ಮಾಡುವುದು.

ಆದುದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV2ಎ, ದಿನಾಂಕ: 15.4.1976, ಸಂಖ್ಯೆ: 2042 ಎಂದು ಪುಟ 6-7 ರಲ್ಲಿ ಪ್ರಕಟಿಸಲಾಗಿದೆ.)

II

**1982ರ ತಿದ್ದುಪಡಿ ಮಾಡುವ ಅಧಿನಿಯಮ 25:-** ರಾಜ್ಯಗಳ ಪುನರ್‌ವಿಂಗಡಣೆ ಅಧಿನಿಯಮ, 1956ರ 115ನೇ ಪ್ರಕರಣದ ಮೇರೆಗೆ ಹೊಸ ರಾಜ್ಯದ ವ್ಯವಹಾರಗಳ ಸಂಬಂಧದಲ್ಲಿ ರಾಜ್ಯಕ್ಕೆ ಸೇವೆ ಸಲ್ಲಿಸಲು ಹಂಚಿಕೆಯಾದವರನ್ನು ಅಥವಾ ಹಂಚಿಕೆಯಾದವರೆಂದು ಭಾವಿಸಲಾದವರನ್ನೂ ಒಳಗೊಂಡು, ಸರ್ಕಾರಿ ನೌಕರರ ಬಡ್ತಿ, ವೇತನ ಮತ್ತು ನಿವೃತ್ತಿ ವೇತನ ಮತ್ತು ಇತರ ಷರತ್ತುಗಳ ವಿನಿಯಮನಕ್ಕಾಗಿ ಉಪಬಂಧ ಕಲ್ಪಿಸುವ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಬಡ್ತಿ, ವೇತನ ಮತ್ತು ನಿವೃತ್ತಿ ವೇತನ ವಿನಿಯಮನ) ಅಧಿನಿಯಮ, 1973 (1973ರ ಅಧಿನಿಯಮ 11) ಇದನ್ನು 1974ನೇ ವರ್ಷದಲ್ಲಿ ಅಂಗೀಕರಿಸಲಾಯಿತು.

2. 1.11.1956 ರಿಂದ ಮಾಡಲಾದ ಬಡ್ತಿಗಳನ್ನು, ಭಾರತ ಸರ್ಕಾರದ ನಿರ್ಧಾರಗಳ ಮೇರೆಗೆ ಪ್ರಕಟಿಸಲಾದ ಅಂತಿಮ ಐ.ಎಸ್.ಎಸ್. ಪಟ್ಟಿಗಳ ಆಧಾರದ ಮೇಲೆ ಈ ಅಧಿನಿಯಮದ 4(1)ನೇ ಪ್ರಕರಣದ ಮೇರೆಗೆ ಪುನರವಲೋಕನ ಮಾಡಬೇಕಾಗಿತ್ತು. ಬಡ್ತಿಗಳನ್ನು ಹಾಗೆ ಪುನರವಲೋಕನ ಮಾಡುವಾಗ, ತಾತ್ಕಾಲಿಕ ಐ.ಎಸ್.ಎಸ್. ಪಟ್ಟಿಗಳಲ್ಲಿನ ಅವರ ಸ್ಥಾನಗಳ ಆಧಾರದ ಮೇಲೆ ಮೊದಲೇ ಬಡ್ತಿ ಹೊಂದಿರುವ ಕೆಲವು ಅಧಿಕಾರಿಗಳು ಅವರ ವಾಸ್ತವಿಕ ಬಡ್ತಿಯ ದಿನಾಂಕಗಳಿಗಿಂತ ತರುವಾಯದ ದಿನಾಂಕಗಳಂದು ಬಡ್ತಿಗೆ ಅರ್ಹರಾಗಿದ್ದರೆಂಬುದನ್ನು ಗಮನಿಸಲಾಯಿತು. ಹಿಂದಿನ ಬಡ್ತಿಗಳು ಅದೃಷ್ಟವಶಾತ್ ಆದವುಗಳೆಂದು ಮತ್ತು ಇದರಿಂದ ವೇತನವನ್ನು ಪುನರ್

ಪರಿಷ್ಕರಣೆ ಮಾಡಬೇಕಾಗಿತ್ತೆಂದು ಅರ್ಥವಾಗುತ್ತದೆ. ಅಂಥ ಸಂದರ್ಭಗಳಲ್ಲಿ ವೇತನವನ್ನು ಸಕ್ರಮಗೊಳಿಸಲು ಈ ಅಧಿನಿಯಮದಲ್ಲಿ ಯಾವುದೇ ಅವಕಾಶವಿರಲಿಲ್ಲ. ಆದ್ದರಿಂದ ಅರ್ಹತೆಯ ದಿನಾಂಕಗಳಂದು ಅಂಥ ಅಧಿಕಾರಿಗಳ ಸಂಬಂಧದಲ್ಲಿ ವೇತನದ ಪುನರ್ ನಿಗದಿಗೆ ಅವಕಾಶ ಕಲ್ಪಿಸುವ ಒಂದು ಉಪಬಂಧವನ್ನು ಈ ಅಧಿನಿಯಮದಲ್ಲಿ ಮಾಡುವುದು ಅಗತ್ಯವೆಂದು ಪರಿಗಣಿಸಲಾಗಿದೆ.

3. ಅಲ್ಲದೆ, ಕರ್ನಾಟಕ ಸೇವಾ ಪರೀಕ್ಷೆಗಳ ಅಧಿನಿಯಮ, 1976 ರಲ್ಲಿ ಒಂದು ಅಸಂಗತವು ಇದೆ. ಸದರಿ ಅಧಿನಿಯಮದ 8(2)ನೇ ಪ್ರಕರಣವು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಬಡ್ತಿ, ವೇತನ ಮತ್ತು ನಿವೃತ್ತಿ ವೇತನ ವಿನಿಯಮನ) ಅಧಿನಿಯಮ, 1973 ಇದರ 3ನೇ ಪ್ರಕರಣವನ್ನು ತಿದ್ದುಪಡಿ ಮಾಡಿದೆ. 1976ನೇ ಅಧಿನಿಯಮವು 1.11.1956 ರಿಂದ ಜಾರಿಗೆ ಬಂದರೆ, 1973ನೇ ಅಧಿನಿಯಮದ 3ನೇ ಪ್ರಕರಣವು, 11.4.1974 ರಿಂದ ಜಾರಿಗೆ ಬಂದಿದೆ. ತಿದ್ದುಪಡಿ ಮಾಡುವ ಉಪಬಂಧವು, ಮೂಲ ಉಪಬಂಧವು ಜಾರಿಗೆ ಬರುವ ದಿನಾಂಕಕ್ಕೆ ಮುಂಚಿನ ದಿನಾಂಕದಿಂದ ಜಾರಿಗೆ ಬರುವುದು ಸಾಧ್ಯವಿಲ್ಲ. ಈ ಅಸಂಗತವನ್ನು ನಿವಾರಿಸಲು ಕರ್ನಾಟಕ ಸೇವಾ ಪರೀಕ್ಷೆಗಳ ಅಧಿನಿಯಮ, 1976ರ 8ನೇ ಪ್ರಕರಣವನ್ನು ಯುಕ್ತವಾಗಿ ತಿದ್ದುಪಡಿ ಮಾಡಲು ಉದ್ದೇಶಿಸಲಾಗಿದೆ.

4. ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ IV-2ಎ ದಿನಾಂಕ: 31.3.1981 ಸಂಖ್ಯೆ: 223 ಎಂದು ಪುಟ 4 ರಲ್ಲಿ ಪ್ರಕಟವಾಗಿದೆ.)

**1976 ಕರ್ನಾಟಕ ಅಧಿನಿಯಮ ಸಂಖ್ಯೆ 40**

(1976ರ ಮೇ ಇಪ್ಪತ್ತೊಂದನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ.)

**ಕರ್ನಾಟಕ ಸೇವಾ ಪರೀಕ್ಷೆಗಳ ಅಧಿನಿಯಮ, 1976**

**(1976ರ ಮೇ ಹತ್ತೊಂಬತ್ತನೇ ದಿನಾಂಕದಂದು ರಾಜ್ಯಪಾಲರ ಅನುಮತಿ ದೊರೆತಿದೆ.)**

**(1982ರ ಅಧಿನಿಯಮ ಸಂಖ್ಯೆ 25ರ ಮೂಲಕ ತಿದ್ದುಪಡಿಯಾದಂತೆ.)**

**ಸೇವಾ ಪರೀಕ್ಷೆಗಳಿಗಾಗಿ ಮತ್ತು ಅದಕ್ಕೆ ಸಂಬಂಧಿಸಿದ ವಿಷಯಗಳಿಗಾಗಿ ಉಪಬಂಧ ಕಲ್ಪಿಸುವ ಅಧಿನಿಯಮ.**

ರಾಜ್ಯದ ವ್ಯವಹಾರಗಳ ಸಂಬಂಧದಲ್ಲಿ ಸೇವೆ ಸಲ್ಲಿಸುತ್ತಿರುವ ವ್ಯಕ್ತಿಗಳಿಗಾಗಿ ನಡೆಸುವ ಇಲಾಖಾ ಪರೀಕ್ಷೆಗಳ ಸಿಂಧುತ್ವವನ್ನು ಕಾಲಕಾಲಕ್ಕೆ ಪ್ರಶ್ನಿಸುತ್ತಿದ್ದುದರಿಂದಾಗಿ;

ತೀರ್ಮಾನಗಳ ಒಂದು ಸಂವರ್ಗದಲ್ಲಿ, ನ್ಯಾಯಾಲಯಗಳು, ಅಂಥ ಪರೀಕ್ಷೆಗಳನ್ನು, ರಾಜ್ಯಗಳ ಪುನರ್‌ವಿಂಗಡಣೆ ಅಧಿನಿಯಮ, 1956ರ 115 (7)ನೇ ಪ್ರಕರಣದ ಪರಂತುಕದ ಅನುಸರಣೆಯಲ್ಲಿ ಕೇಂದ್ರ ಸರ್ಕಾರದ ಪೂರ್ವಾನುಮೋದನೆ ಪಡೆದ ತರುವಾಯ ಕಾನೂನು ಬದ್ಧವಾಗಿ ನಿರ್ದಿಷ್ಟಪಡಿಸಬಹುದು ಎಂದು ತೀರ್ಪು ಕೊಟ್ಟಿರುವುದರಿಂದಾಗಿ, ನಂತರದ ಮೊಕದ್ದಮೆಯೊಂದರಲ್ಲಿ, ಸರ್ವೋಚ್ಚ ನ್ಯಾಯಾಲಯವು, ಅಂಥ ಪೂರ್ವಾನುಮೋದನೆಯು 1957ರ ಮಾರ್ಚ್ 27ನೇ ದಿನಾಂಕದ ಕೇಂದ್ರ ಸರ್ಕಾರದ ಅಧಿಕೃತ ಜ್ಞಾಪನ ಪತ್ರದ ನಿಬಂಧನೆಗಳ ಅನುಸಾರ ಇದೆಯೆಂದು ಭಾವಿಸಬಹುದೆಂದು ತೀರ್ಪು ಕೊಟ್ಟಿರುವುದರಿಂದಾಗಿ;

ಈ ರೀತಿಯ ವಿಭಿನ್ನ ನಿಲುವುಗಳು, ಬಡ್ತಿಗಳ ಮತ್ತು ಅವುಗಳ ಪುನರವಲೋಕನದ ವಿಷಯದಲ್ಲಿ ಅನಿಶ್ಚಿತತೆ ಮತ್ತು ಗೊಂದಲಕ್ಕೆ ಕಾರಣವಾಗಿರುವುದರಿಂದ;

ವಿಷಯಗಳನ್ನು ಸರಿಪಡಿಸುವ ಉದ್ದೇಶದಿಂದ, ಸೇವಾ ಪರೀಕ್ಷೆಗಳನ್ನು ನಿರ್ದಿಷ್ಟಪಡಿಸಿ ಕರ್ನಾಟಕ ಸಿವಿಲ್ ಸೇವೆಗಳ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳು, 1974ನ್ನು ಹೊರಡಿಸಿರುವುದರಿಂದ;

ನ್ಯಾಯಾಲಯದ ಕೆಲವು ಮುಂಚಿನ ತೀರ್ಮಾನಗಳ ಆಧಾರದ ಮೇಲೆ, ಕೆಲವು ಪ್ರಕರಣಗಳಲ್ಲಿ, ಪೂರ್ವಾನ್ವಯ ಬಡ್ತಿಗಾಗಿ ಮತ್ತು ಹಿಂದಿನ ವೇತನ ಸಂದಾಯ ಇತ್ಯಾದಿಯನ್ನು ಕ್ಲೇಮು ಮಾಡುತ್ತಿರುವುದರಿಂದ ಮತ್ತು ಕೊಡಬೇಕೆಂದು ಕೋರುತ್ತಿರುವುದರಿಂದ;

ಹಾಗೆ ಬಡ್ತಿ ನೀಡುವುದು ಮತ್ತು ವೇತನ ಸಂದಾಯ ಮಾಡುವುದು, ಆರ್ಥಿಕವಾಗಿ ಮತ್ತು ಬೇರೆ ರೀತಿಯಲ್ಲಿ ಸಹ ಸಾಧ್ಯವಾಗದಿರುವುದರಿಂದ;

ಭಾರತ ಗಣರಾಜ್ಯದ ಇಪ್ಪತ್ತೇಳನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಇದು ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:-

**1. ಚಿಕ್ಕ ಹೆಸರು ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು ಕರ್ನಾಟಕ ಸೇವಾ ಪರೀಕ್ಷೆಗಳ ಅಧಿನಿಯಮ, 1976 ಎಂದು ಕರೆಯತಕ್ಕದ್ದು.

[1][(2) 8ನೇ ಪ್ರಕರಣವನ್ನು ಹೊರತುಪಡಿಸಿ, ಈ ಪ್ರಕರಣವು ಮತ್ತು ಎಲ್ಲ ಇತರ ಪ್ರಕರಣಗಳು, 1956ರ ನವೆಂಬರ್ ಮೊದಲ ದಿನಾಂಕದಂದು ಜಾರಿಗೆ ಬಂದಿವೆ ಎಂದು ಭಾವಿಸತಕ್ಕದ್ದು. 8ನೇ ಪ್ರಕರಣವು 1974ರ ಏಪ್ರಿಲ್ ಹನ್ನೊಂದನೇ ದಿನಾಂಕದಂದು ಜಾರಿಗೆ ಬಂದಿದೆ ಎಂದು ಭಾವಿಸತಕ್ಕದ್ದು.][1]

**2. ಪರಿಭಾಷೆಗಳು.-** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) 'ಸೇವಾ ಪರೀಕ್ಷೆಗಳು' ಎಂಬುದು ಸಂವಿಧಾನದ 309ನೇ ಅನುಚ್ಛೇದದ ಪರಂತುಕದ ಮೇರೆಗೆ ಹೊರಡಿಸಲಾದ ಕರ್ನಾಟಕ ಸಿವಿಲ್ ಸೇವೆಗಳ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳು, 1974 ರಲ್ಲಿರುವ "ನಿರ್ದಿಷ್ಟಪಡಿಸಿದ ಪರೀಕ್ಷೆಗಳು" ಎಂಬ ಅರ್ಥವನ್ನೇ ಹೊಂದಿರತಕ್ಕದ್ದು;

1.1982ರ ಅಧಿನಿಯಮ ಸಂಖ್ಯೆ 25ರ ಮೂಲಕ 21-05-1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಬಿ) 'ಸರ್ಕಾರಿ ನೌಕರ' ಎಂದರೆ ಕರ್ನಾಟಕ ರಾಜ್ಯದ ವ್ಯವಹಾರಗಳ ಸಂಬಂಧದಲ್ಲಿ ಸೇವೆ ಸಲ್ಲಿಸುತ್ತಿರುವ ವ್ಯಕ್ತಿ ಮತ್ತು ಇದು, ರಾಜ್ಯಗಳ ಪುನರ್‌ವಿಂಗಡಣೆ ಅಧಿನಿಯಮ, 1956 (ಕೇಂದ್ರ ಅಧಿನಿಯಮ 1956ರ 37)ರ 115ನೇ ಪ್ರಕರಣದ ಅನುಸರಣೆಯಲ್ಲಿ ಹೊಸ ಮೈಸೂರು ರಾಜ್ಯಕ್ಕೆ ಹಂಚಿಕೆ ಮಾಡಲಾದ ಅಥವಾ ಹಂಚಿಕೆ ಮಾಡಲಾಗಿದೆ ಎಂದು ಭಾವಿಸಲಾದ ವ್ಯಕ್ತಿಯನ್ನು ಒಳಗೊಳ್ಳುತ್ತದೆ.

**3. 1956ರ ನವೆಂಬರ್ 1 ರಿಂದ 1974ರ ಜನವರಿ 9ರ ವರೆಗಿನ ಅವಧಿಯಲ್ಲಿ ಯಾವುದೇ ಸೇವಾ ಪರೀಕ್ಷೆಯು ಇರಲಿಲ್ಲ.-** (1) 1956ರ ನವೆಂಬರ್ 1 ರಂದು ಆರಂಭವಾಗುವ ಮತ್ತು 1974ರ ಜನವರಿ 9 ರಂದು ಕೊನೆಗೊಳ್ಳುವ ಅವಧಿಯಲ್ಲಿ, ಬಡ್ತಿಗೆ ಅರ್ಹತೆಯ ಉದ್ದೇಶಕ್ಕಾಗಿ, ಸರ್ಕಾರಿ ನೌಕರರಿಗೆ, ಯಾವ ಸೇವಾ ಪರೀಕ್ಷೆಯನ್ನು ನಿರ್ದಿಷ್ಟಪಡಿಸತಕ್ಕದ್ದಲ್ಲ ಮತ್ತು ಹಾಗೆ ನಿರ್ದಿಷ್ಟಪಡಿಸಲಾಗಿತ್ತೆಂದು ಸಹ ಯಾವಾಗಲೂ ಭಾವಿಸತಕ್ಕದ್ದಲ್ಲ.

(2) ಸರ್ಕಾರಿ ನೌಕರನು, ಮೇಲೆ ಹೇಳಿದ ಅವಧಿಯಲ್ಲಿ, ಯಾವುದೇ ಸೇವಾ ಪರೀಕ್ಷೆಯಲ್ಲೂ ಉತ್ತೀರ್ಣನಾಗಿಲ್ಲವೆಂಬ ಒಂದೇ ಕಾರಣದ ಮೇಲೆ ಬಡ್ತಿ ನೀಡಿರದಿದ್ದರೆ, ಅವನಿಗೆ ಈಗಾಗಲೇ ಬಡ್ತಿ ನೀಡಿರದಿದ್ದರೆ ಮತ್ತು ಅವನು ಅನ್ಯಥಾ ಅರ್ಹನಾಗಿದ್ದರೆ, ಬಡ್ತಿ ನೀಡತಕ್ಕದ್ದು.

(3) (2)ನೇ ಉಪ-ಪ್ರಕರಣದ ಮೇರೆಗಿನ ಪ್ರತಿಯೊಂದು ಬಡ್ತಿಯು, ಯಾವುದೇ ನ್ಯಾಯಾಲಯದ ಯಾವುದೇ ತೀರ್ಪು, ಡಿಕ್ರಿ ಅಥವಾ ಆದೇಶವು ಏನೇ ಇದ್ದರೂ, 1974ರ ಜನವರಿ 10ರ ತರುವಾಯದ ದಿನಾಂಕದಿಂದ ಮಾತ್ರ ಉತ್ತರಾನ್ವಯವಾಗತಕ್ಕದ್ದು:

ಪರಂತು,-

(1) ಬಡ್ತಿ ಪಡೆದ ವ್ಯಕ್ತಿಯು, ಸೇವಾ ಪರೀಕ್ಷೆಯಲ್ಲಿ ಉತ್ತೀರ್ಣನಾಗಿರದಿದ್ದರೂ ಕೂಡ ಅವನಿಗೆ ಬಡ್ತಿ ನೀಡಬಹುದಾಗಿದ್ದ ದಿನಾಂಕದಿಂದ (ಇಲ್ಲಿ ಇನ್ನು ಮುಂದೆ ಅರ್ಹತಾ ದಿನಾಂಕ ಎಂದು ಉಲ್ಲೇಖಿಸಲಾಗಿದೆ) ಬಡ್ತಿ ಹುದ್ದೆಯನ್ನು ಧಾರಣ ಮಾಡಿದ್ದಿದ್ದರೆ ಹೇಗೋ ಹಾಗೆ, ವಾಸ್ತವಿಕ ಬಡ್ತಿಯ ದಿನಾಂಕದಿಂದ ಪ್ರಾರಂಭಿಕ ವೇತನಕ್ಕೆ ಹಕ್ಕುಳ್ಳವನಾಗಿರತಕ್ಕದ್ದು, ಆದರೆ, ಅಂಥ ವ್ಯಕ್ತಿಯು, ವಾಸ್ತವಿಕ ಬಡ್ತಿಯ ದಿನಾಂಕಕ್ಕಿಂತ ಮುಂಚಿನ ಅವಧಿಗೆ ಯಾವುದೇ ಬಾಕಿಯ ಸಂದಾಯಕ್ಕೆ ಹಕ್ಕುಳ್ಳವನಾಗಿರತಕ್ಕದ್ದಲ್ಲ.

(2) ಬಡ್ತಿ ಹೊಂದಬೇಕಿದ್ದ ವ್ಯಕ್ತಿಯು, 1974ರ ಜನವರಿ 10ಕ್ಕೂ ಮುಂಚಿತವಾಗಿ ಸೇವೆಯಿಂದ ನಿವೃತ್ತನಾಗಿದ್ದರೆ, ಅವನು, ಅನ್ಯಥಾ ಅರ್ಹನಾಗಿದ್ದರೆ, ಅವನಿಗೆ ಅರ್ಹತಾ ದಿನಾಂಕದಿಂದ ಬಡ್ತಿ ನೀಡಲಾಗಿದೆಯೆಂದು ಭಾವಿಸತಕ್ಕದ್ದು ಮತ್ತು ಅವನ ನಿವೃತ್ತಿ ವೇತನವನ್ನು ಮತ್ತು ಮರಣ ಹಾಗೂ ನಿವೃತ್ತಿ ಉಪದಾನಗಳನ್ನು, ಆ ದಿನಾಂಕದಿಂದ ಅವನಿಗೆ ಹಾಗೆ ಬಡ್ತಿ ನೀಡಿದ್ದಿದ್ದರೆ ಅವನು ಪಡೆಯಬಹುದಾಗಿದ್ದ ವೇತನದ ಆಧಾರದ ಮೇಲೆ ಪರಿಷ್ಕರಿಸತಕ್ಕದ್ದು.

**4. 1974ರ ಜನವರಿ 10 ರಿಂದ ಆರಂಭವಾಗುವ ಅವಧಿಗೆ ಸೇವಾ ಪರೀಕ್ಷೆಗಳು.-** 1974ರ ಜನವರಿ 10 ರಂದು ಮತ್ತು ಅಲ್ಲಿಂದ,-

(ಎ) ಸೇವಾ ಪರೀಕ್ಷೆಗಳು, ಕರ್ನಾಟಕ ಸಿವಿಲ್ ಸೇವೆಗಳ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳು, 1974 ರಲ್ಲಿ ಹೇಳಿರುವಂತೆ ನಿರ್ದಿಷ್ಟಪಡಿಸಿರುವವುಗಳೇ ಆಗಿರತಕ್ಕದ್ದು; ಮತ್ತು

(ಬಿ) 3ನೇ ಪ್ರಕರಣದ (2)ನೇ ಉಪ-ಪ್ರಕರಣದ ಮೇರೆಗೆ ಬಡ್ತಿ ಹೊಂದಿದ ಸರ್ಕಾರಿ ನೌಕರನೂ ಸೇರಿದಂತೆ ಪ್ರತಿಯೊಬ್ಬ ಸರ್ಕಾರಿ ನೌಕರನೂ, ಉಪಬಂಧಿಸಿರುವಂತೆ ಮತ್ತು ಅದರಲ್ಲಿ ನಿರ್ದಿಷ್ಟಪಡಿಸಿದ ಉದ್ದೇಶಗಳಿಗಾಗಿ ಸೇವಾ ಪರೀಕ್ಷೆಗಳಲ್ಲಿ ತೇರ್ಗಡೆ ಯಾಗಬೇಕೆಂದು ಅಗತ್ಯಪಡಿಸತಕ್ಕದ್ದು. ತೇರ್ಗಡೆಯಾಗಲು ವಿಫಲನಾದರೆ ನಿಯಮಗಳಲ್ಲಿ ನಿರ್ದಿಷ್ಟಪಡಿಸಿದ ಪರಿಣಾಮಗಳಿಗೆ ಗುರಿಯಾಗತಕ್ಕದ್ದು.

**5. ಪುನರವಲೋಕನ, ಇತ್ಯಾದಿ.-** (1) 3ನೇ ಪ್ರಕರಣದ ಮೇರೆಗೆ ಬಡ್ತಿ ಇರುವಂತೆ ಮಾಡುವ ಸಲುವಾಗಿ, 1956ರ ನವೆಂಬರ್ 1ರ ಮತ್ತು 1974ರ ಜನವರಿ 9ರ ನಡುವೆ ಮಾಡಲಾದ ಬಡ್ತಿಗಳ ಪುನರವಲೋಕನವನ್ನು ಮಾಡತಕ್ಕದ್ದು ಮತ್ತು ಬಡ್ತಿ ಹೊಂದಿದ ವ್ಯಕ್ತಿಗಳು, ಬಡ್ತಿ ಹೊಂದಲಿರುವ ವ್ಯಕ್ತಿಗಿಂತ ಕಿರಿಯರಾಗಿದ್ದರೆ, ಸ್ಥಾನವನ್ನು ಬಿಟ್ಟುಕೊಡತಕ್ಕದ್ದು ಮತ್ತು ಅವಶ್ಯವಿರುವಲೆಲ್ಲಾ ಕೆಳಗಿನ ಹುದ್ದೆಗೆ ಹಿಂಬಡ್ತಿ ನೀಡತಕ್ಕದ್ದು.

(2) 3ನೇ ಪ್ರಕರಣದ ಮೇರೆಗೆ ಸರ್ಕಾರಿ ನೌಕರನಿಗೆ ಯಾವ ಸೇವೆಯ ವರ್ಗಕ್ಕೆ ಅಥವಾ ದರ್ಜೆಗೆ ಬಡ್ತಿ ನೀಡಲಾಗಿದೆಯೋ ಆ ವರ್ಗದ ಅಥವಾ ದರ್ಜೆಯಲ್ಲಿರುವ ವ್ಯಕ್ತಿಗಳ ಜ್ಯೇಷ್ಠತಾ ಪಟ್ಟಿಯಲ್ಲಿ, ಬಡ್ತಿ ಹೊಂದಿದ ವ್ಯಕ್ತಿಯ ಪಂಕ್ತಿಯನ್ನು, ಅವನು ಆ ಸೇವೆಯ ವರ್ಗಕ್ಕೆ ಅಥವಾ ದರ್ಜೆಗೆ ಅರ್ಹತೆಯ ದಿನಾಂಕದಂದು ಬಡ್ತಿ ಹೊಂದಿದ್ದಿದ್ದರೆ ಹೇಗೋ ಹಾಗೆ ನಿಗದಿಪಡಿಸತಕ್ಕದ್ದು.

**6. 1974ರ ಅಧಿನಿಯಮ ಸಂಖ್ಯೆ 11ರ ಅನ್ವಯ.-** ಈ ಅಧಿನಿಯಮದಲ್ಲಿ ವ್ಯಕ್ತವಾಗಿ ಉಪಬಂಧಿಸಿರದ ವಿಷಯಗಳ ಸಂಬಂಧದಲ್ಲಿ, 8ನೇ ಪ್ರಕರಣದ ಮೂಲಕ ತಿದ್ದುಪಡಿಯಾದಂತೆ, ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಬಡ್ತಿ, ವೇತನ ಮತ್ತು ನಿವೃತ್ತಿ ವೇತನ ವಿನಿಯಮನ) ಅಧಿನಿಯಮ, 1973ರ (1974ರ ಕರ್ನಾಟಕ ಅಧಿನಿಯಮ 11) ಉಪಬಂಧಗಳು ಈ ಅಧಿನಿಯಮಕ್ಕೆ ಅಸಂಗತವಾಗದಿರುವಷ್ಟರ ಮಟ್ಟಿಗೆ ಅನ್ವಯವಾಗತಕ್ಕದ್ದು.

**7. ನಿಯಮಗಳ ರಚನಾಧಿಕಾರ.-** (1) ರಾಜ್ಯ ಸರ್ಕಾರವು ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸಲು ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಮೇರೆಗೆ ರಚಿಸಿದ ಪ್ರತಿಯೊಂದು ನಿಯಮವನ್ನು ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ಅನುಕ್ರಮ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಇಡತಕ್ಕದ್ದು, ಮತ್ತು ಸದರಿ ಅಧಿವೇಶನದ ಅಥವಾ ಅನುಕ್ರಮ ಅಧಿವೇಶನಗಳ ನಿಕಟ ತರುವಾಯದ ಅಧಿವೇಶನವು ಮುಗಿಯುವುದಕ್ಕೆ ಮುಂಚೆ ಆ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಎರಡೂ ಸದನಗಳು ಒಪ್ಪಿದರೆ, ಆ ಮಾರ್ಪಾಟು ಅಥವಾ ರದ್ದಿಯಾತಿಯನ್ನು ಸರ್ಕಾರಿ

ರಾಜ್ಯಪತ್ರದಲ್ಲಿ ಅಧಿಸೂಚಿಸಲಾದ ದಿನಾಂಕದಿಂದ ಅಂಥ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರ, ಪರಿಣಾಮಕಾರಿಯಾಗತಕ್ಕದ್ದಲ್ಲ; ಆದಾಗ್ಯೂ, ಯಾವುದೇ ಅಂಥ ಮಾರ್ಪಾಟು ಅಥವಾ ರದ್ದಿಯಾತಿಯು ಅಂಥ ನಿಯಮದ ಮೇರೆಗೆ ಈ ಹಿಂದೆ ಮಾಡಿದ ಯಾವುದೇ ಕೃತ್ಯದ ಸಿಂಧುತ್ವಕ್ಕೆ ಬಾಧಕವನ್ನುಂಟು ಮಾಡತಕ್ಕದ್ದಲ್ಲ.

**8. 1974ರ ಕರ್ನಾಟಕ ಅಧಿನಿಯಮ 11ರ ತಿದ್ದುಪಡಿ.-** ಮೈಸೂರು ರಾಜ್ಯ ಸೇವೆಗಳ (ಬಡ್ತಿ, ವೇತನ ಮತ್ತು ನಿವೃತ್ತಿ ವೇತನ ವಿನಿಯಮನ) ಅಧಿನಿಯಮ, 1973 (1974ರ ಕರ್ನಾಟಕ ಅಧಿನಿಯಮ 11) ರಲ್ಲಿ,-

(1) 'ಮೈಸೂರು' ಎಂಬ ಪದಕ್ಕೆ, ಅದು ಬರುವಲ್ಲೆಲ್ಲ (ಶೀರ್ಷಿಕೆ, ಪ್ರಸ್ತಾವನೆ, ಚಿಕ್ಕ ಹೆಸರನ್ನೂ ಒಳಗೊಂಡಂತೆ) 'ಕರ್ನಾಟಕ' ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು;

(2) 3ನೇ ಪ್ರಕರಣದ (1)ನೇ ಉಪ-ಪ್ರಕರಣದ (ಎ) ಖಂಡಕ್ಕೆ ಈ ಮುಂದಿನ ಖಂಡವನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"(ಎ) ಈ ಅಧಿನಿಯಮದ ಮೇರೆಗೆ ಮಾಡಿದ ನಿಯಮಗಳಲ್ಲಿ ನಿರ್ದಿಷ್ಟಪಡಿಸಿರುವುದನ್ನು ಹೊರತುಪಡಿಸಿ ಮತ್ತು ಅಷ್ಟರಮಟ್ಟಿಗೆ ಪೂರ್ವಾನ್ವಯ ದಿನಾಂಕದಿಂದ ಪರಿಣಾಮಕಾರಿಯಾಗುವಂತೆ ಯಾವುದೇ ಹುದ್ದೆಗೆ ಅಥವಾ ಪದಕ್ಕೆ ಬಡ್ತಿ ಹೊಂದಲು."

(3) 9ನೇ ಪ್ರಕರಣದ ತರುವಾಯ, ಈ ಮುಂದಿನ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:-

"**9ಎ. ನಿಯಮಗಳು.-** (1) ರಾಜ್ಯ ಸರ್ಕಾರವು ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಮೇರೆಗೆ ಮಾಡಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ಅನುಕ್ರಮ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಮೂವತ್ತು ದಿನಗಳ ಅವಧಿಯವರೆಗೆ ಇಡತಕ್ಕದ್ದು ಮತ್ತು ಸದರಿ ಅಧಿವೇಶನದ ಅಥವಾ ಅನುಕ್ರಮ ಅಧಿವೇಶನಗಳ ನಿಕಟ ತರುವಾಯದ ಅಧಿವೇಶನಗಳು ಮುಗಿಯುವುದಕ್ಕೆ ಮುಂಚೆ ಆ ನಿಯಮದಲ್ಲಿ ಯಾವುದೇ ಮಾರ್ಪಾಟು ಮಾಡಬೇಕೆಂದು ಎರಡೂ ಸದನಗಳು ಒಪ್ಪಿದರೆ ಅಥವಾ ಆ ನಿಯಮವನ್ನು ಮಾಡಕೂಡದೆಂದು ಎರಡೂ ಸದನಗಳು ಒಪ್ಪಿದರೆ, ಆ ಮಾರ್ಪಾಟು ಅಥವಾ ರದ್ದಿಯಾತಿಯನ್ನು ಸರ್ಕಾರವು ರಾಜ್ಯಪತ್ರದಲ್ಲಿ ಅಧಿಸೂಚಿಸಿದ ದಿನಾಂಕದಿಂದ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ; ಆದಾಗ್ಯೂ, ಯಾವುದೇ ಅಂಥ ಮಾರ್ಪಾಟು ಅಥವಾ ರದ್ದಿಯಾತಿಯು ಅಂಥ ನಿಯಮದ ಮೇರೆಗೆ ಆ ಹಿಂದೆ ಮಾಡಿದ ಯಾವುದೇ ಕೃತ್ಯದ ಸಿಂಧುತ್ವಕ್ಕೆ ಬಾಧಕವನ್ನುಂಟುಮಾಡತಕ್ಕದ್ದಲ್ಲ."

The above translation of the Karnataka Service Examinations Act, 1976 (40 of 1976) shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963)

Bangalore

**GOVERNOR OF KARNATAKA**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1356

**ಮ.ರಾ. ಹೆಗಡೆ**

ಸರ್ಕಾರದ ಕಾರ್ಯದರ್ಶಿ

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ.

## ಇಂಧನ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಇಂಇ 197 ಇಇಬಿ 2003, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2003

ಶ್ರೀ ಕರಿಯಣ್ಣ, ವಿಧಾನ ಸಭಾ ಸದಸ್ಯರು ಇವರನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ನಿಯಮಾವಳಿ (ಮೆಮೊರಾಂಡಂ ಆಫ್ ಅಸೋಸಿಯೇಷನ್) ಇದರ ಆರ್ಟಿಕಲ್ಸ್ 30(1)(ಎ) & (ಬಿ)ಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ನಿರ್ದೇಶಕರನ್ನಾಗಿ ಹಾಗೂ ಅಧ್ಯಕ್ಷರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಇವರಿಗೆ ಕ್ಯಾಬಿನೆಟ್ ಸಚಿವರ ಸ್ಥಾನಮಾನವನ್ನು ನೀಡಲಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1342

**ಕೆ.ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## FOOD, CIVIL SUPPLIES AND CONSUMER AFFAIRS SECRETARIAT

## NOTIFICATION

### No. FCS 96 SLF 2001, Bangalore, Dated: 31st December 2003

In exercise of the powers conferred by sub-section (2) of Section 30 of the Consumer Protection Act, 1986 (Central Act 68 of 1986), the Government of Karnataka hereby makes the following Rules further to amend the Karnataka Consumer Protection Rules, 1988, namely:-

**1. Title and Commencement.-** (1) These rules may be called the Karnataka Consumer Protection (Amendment) Rules, 2003.

(2) They shall come into force on the date of their publication in the Official Gazette.

**2. Amendment of Rule 3.-** In Rule 3 of the Karnataka Consumer Protection Rules 1988 (hereinafter referred to as the said Rules), in sub-rule (5A) in the third proviso for the words "with or without honorarium shall not exceed five days at a time excluding general holidays" the words "with honorarium, shall not exceed five days at a time, excluding general holidays and shall be entitled for leave for more than five days without honorarium" shall be substituted.

**3. Amendment of Rule 6.-** In rule 6 of the said rules in sub-rule (13).-

(i) in the proviso, for the words "with or without honorarium shall not exceed five days at a time, excluding general holidays", the words "with honorarium shall not exceed five days at a time, excluding general holidays and shall be entitled for leave for more than five days without honorarium" shall be substituted.

(ii) after the proviso, the following shall be inserted, namely:-

"Provided further that no leave may be sanctioned to any member of the State Commission or District Forum, unless atleast one member is present to carry on the function of the State Commission or as the case may be, the District Forum."

By Order and in the name of the Governor of Karnataka,

P.R. 1343

**A.S. VISHWESHWARAIAH**

Desk Officer, Food-III Section,

Food, Civil Supplies and Consumer Affairs Department.

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಕಾಇ 47 ಕಾಬಾನಿ 2003, ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್ 2003**

**ವಿಷಯ:** ಮೆ:ಗೊಯಟ್ಸ್ (ಇಂಡಿಯ) ಲಿಮಿಟೆಡ್, ನೊಂದಿಗೆ ಮೆ:ಎಸ್ಕಾರ್ಟ್ಸ್ ಪಿಸ್ವಾನ್ಸ್ ಲಿಮಿಟೆಡ್, ಕಾರ್ಖಾನೆಯನ್ನು ಒಂದುಗೂಡಿಸುವ ಬಗ್ಗೆ-ಆದೇಶ.

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕಾರ್ಖಾನೆಗಳ ಕಾಯ್ದೆ, 1948ರ (ಕೇಂದ್ರ ಕಾಯ್ದೆ, 1948) ಕಲಂ 4ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಮೆ:ಗೊಯೆಟ್ಸ್ (ಇಂಡಿಯ) ಲಿಮಿಟೆಡ್‌ನೊಂದಿಗೆ ಮೆ:ಎಸ್ಕಾರ್ಟ್ಸ್ ಪಿಸ್ವನ್ಸ್ ಲಿಮಿಟೆಡ್, ಈ ಕಾರ್ಖಾನೆಯನ್ನು ಒಂದುಗೂಡಿಸಿ 2003 ರಿಂದ ಜಾರಿಗೆ ಬರುವಂತೆ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಹೆಚ್. ಉಮಾಪತಿ**

ಪಿ.ಆರ್. 1344

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ, (ಕಾರ್ಖಾನೆ ಮತ್ತು ಬಾಯ್ಲರುಗಳು)

**LABOUR SECRETARIAT**

**NOTIFICATION**

**No. LD 373 LSI 2000, Bangalore, Dated: 24th December 2003**

In exercise of the powers conferred by Section 87 read with 91-A of the ESI Act (Central Act 34 of 1948) the Government of Karnataka hereby exempts M/s. Gulbarga Co-operative Milk Producers Societies Union Limited from the Operation of the said Act for the period from 01-05-1983 to 30-09-1988.

By Order and in the name of the Governor of Karnataka,

P.R. 1345

**H. VISWANATH**

Under Secretary to Government,

Labour Department (ESIS (M) Services)

**LAW SECRETARIAT**

**NOTIFICATION No. LAW 67 LAG 2003, Bangalore, Dated: 17th December 2003**

In exercise of the powers conferred under Rule 22 A of the Karnataka Law Officers (Appointment and Conditions of Service) Rules, 1977, Government of Karnataka hereby appoints SHRI GOPAL JAIN, Advocate, Supreme Court of India, No: B-93, Gulmohar Park, New Delhi-110 049 as the Associate Advocate on behalf of the State Government in such cases, which will be entrusted to him, before the Supreme Court for a period of three years or until further orders, whichever is earlier.

SHRI GOPAL JAIN, Associate Advocate shall be paid fees as specified in Second Schedule of the Karnataka Law Officers (Appointment and Conditions of Service) Rules, 1977.

By Order and in the name of the Governor of Karnataka,

P.R. 1346

**K.G.V. MURTHY**

Deputy Secretary to Government (Administration), Law Department